# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 153
ಸದಸ್ಯರ ಹೆಸರು : ಡಾ॥ ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 21-09-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರಿ ಪ್ರೌಢ ಶಾಲೆಗಳಲ್ಲಿನ ಅರ್ಹ ಸಹ ಶಿಕ್ಷಕರುಗಳಿಗೆ ಪದವಿಪೂರ್ವ ಕಾಲೇಜಿನ ಉಪನ್ಯಾಸಕರಾಗಿ ಬಡ್ತಿ ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು: | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 71 ಎಸ್ಆರ್ಇ 94 ದಿನಾಂಕ:27-05-1998ರಲ್ಲಿ ಶೇಕಡ 50ರಷ್ಟು ಉಪನ್ಯಾಸಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಮತ್ತು ಶೇಕಡ 50ರಷ್ಟು ಪ್ರೌಢ ಶಾಲಾ ಸಹ ಶಿಕ್ಷಕರ ವೃಂದದಿಂದ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ವೃಂದಕ್ಕೆ ಬಡ್ತಿ ನೀಡಲು ಅವಕಾಶ ಕಲ್ಪಿಸಲಾಗಿತ್ತು. ಅದರಂತೆ, 2011ರಲ್ಲಿ ಅರ್ಹ 487 ಮತ್ತು 697 ಪ್ರೌಢ ಶಾಲಾ ಸಹ ಶಿಕ್ಷಕರನ್ನು ಉಪನ್ಯಾಸಕರ ವೃಂದಕ್ಕೆ ಬಡ್ತಿ ನೀಡಲಾಗಿರುತ್ತದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 35 ಡಿಜಿಓ 2009 ದಿನಾಂಕ:15-05-2014ರಂದು ವೃಂದ ಮತ್ತು ನೇಮಕಾತಿ ನಿಯಮಕ್ಕೆ ಪರಿಷ್ಕರಣೆ ಮಾಡಿ ಶೇಕಡ 75ರಷ್ಟು ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಮತ್ತು ಶೇಕಡ 25ರಷ್ಟು ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ಅವಕಾಶ ಕಲ್ಪಿಸಲಾಗಿದೆ.<br><br>ಪ್ರೌಢ ಶಾಲಾ ಸಹ ಶಿಕ್ಷಕರಿಗೆ ಉಪನ್ಯಾಸಕರ ವೃಂದಕ್ಕೆ ಬಡ್ತಿ ಕೋಟಾದಲ್ಲಿ ಈಗಾಗಲೇ ಶೇಕಡ 50ರಷ್ಟು ಪದೋನ್ನತಿ ನೀಡಿದ್ದರಿಂದ 395 ಹುದ್ದೆಗಳು ಹೆಚ್ಚುವರಿಯಾಗಿದ್ದು, ಶೇಕಡ 75:25ರ ಬಡ್ತಿ ಕೋಟಾದ ಹುದ್ದೆಗಳು ಖಾಲಿ ಇಲ್ಲದಿರುವುದರಿಂದ ಪ್ರಸ್ತುತ ಬಡ್ತಿ ನೀಡಲು ಅವಕಾಶವಿರುವುದಿಲ್ಲ. |
| ಆ) | ಇಂತಹ ಅರ್ಹ ಸಹಶಿಕ್ಷಕರುಗಳಿಗೆ ಯಾವ ಕಾಲಮಿತಿಯೊಳಗೆ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರಾಗಿ ಬಡ್ತಿ ನೀಡಲಾಗುವುದು? | 2014ರ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಈಗಾಗಲೆ 395 ಹುದ್ದೆಗಳು ಹೆಚ್ಚುವರಿಯಾಗಿದ್ದು, ಬಡ್ತಿ ಕೋಟಾದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪನ್ಯಾಸಕರು ವಯೋ ನಿವೃತ್ತಿ, ರಾಜೀನಾಮೆ ಹಾಗೂ ನಿಧನದಿಂದ ತೆರವಾಗುವ ಹುದ್ದೆಗಳನ್ನು ಮುಂಬಡ್ತಿಗೆ ಪರಿಗಣಿಸಲಾಗುವುದು. |

ಸಂಖ್ಯೆ: ಇಪಿ 115 ಡಿಜಿಡಬ್ಲ್ಯೂ 2020

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.